(ಸಿ) **"ಸಾಮಾನ್ಯ ಸಾಮಾಜಿಕ ವಲಯದ ಸ್ಕೀಮುಗಳು"** ಎಂದರೆ, ಉಪ–ಯೋಜನೆಗಳಲ್ಲಿ ಸೇರಿಸಿರುವ ಶಿಕ್ಷಣ, ಆರೋಗ್ಯ, ಮಹಿಳಾ ಮತ್ತು ಮಕ್ಕಳು, ಕಾರ್ಮಿಕ, ದೈಹಿಕ ವಿಕಲ ಚೇತನರ ಸ್ಕೀಮುಗಳು. ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡದ ವ್ಯಕ್ತಿಗಳಿಗೆ ಅಥವಾ ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡದ ಕುಟುಂಬಗಳಿಗೆ, ಇತರರ ಜೊತೆಯಲ್ಲಿ ಪ್ರಯೋಜನವಾಗುವಂತಿದ್ದರೆ, ಸ್ಕೀಮಿನ ವೆಚ್ಚವನ್ನು, ಅನುಸೂಚಿತ ಜಾತಿಗಳು ಅಥವಾ ಅನುಸೂಚಿತ ಪಂಗಡದ ಫಲಾನುಭವಿಗಳ ಜನ ಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆ ಅಡಿಯಲ್ಲಿ ಹಂಚಿಕೆ ಮಾಡತಕ್ಕದ್ದು ಮತ್ತು ಲೆಕ್ಕ ತೋರಿಸತಕ್ಕದ್ದು;

(ಡಿ) ವಿಭಜಿಸಲಾಗದ ಮೂಲ ಸೌಕರ್ಯ ಕಾಮಗಾರಿಗಳಿಗೆ ಸಂಬಂಧಿಸಿದಂತೆ, ಸರ್ಕಾರವು ನಿರ್ಧರಿಸಬಹುದಾದಂಥ ಸ್ಕೀಮು ವೆಚ್ಚದ ಒಂದು ಭಾಗವನ್ನು ಅನುಕ್ರಮವಾಗಿ ಅನುಸೂಚಿತ ಜಾತಿಗಳ ಉಪ–ಯೋಜನೆ ಮತ್ತು ಬುಡಕಟ್ಟು ಉಪ–ಯೋಜನೆಗೆ ಒದಗಿಸಲಾಗಿದೆ ಎಂದು ಭಾವಿಸತಕ್ಕದ್ದು.

**8. ನೋಡಲ್ ಏಜೆನ್ಸಿಗಳು ಮತ್ತು ನೋಡಲ್ ಇಲಾಖೆಯು ಶಿಫಾರಸು ಮಾಡುವುದು.–** ಅಧಿನಿಯಮದಲ್ಲಿ ತಿಳಿಸಿದ ಮಾನದಂಡಗಳನ್ನು ಪೂರೈಸುವ ಸ್ಕೀಮುಗಳನ್ನು, ನೋಡಲ್ ಏಜೆನ್ಸಿಯು, ಇಲಾಖೆಗಳ ವಾರ್ಷಿಕ ಯೋಜನೆ ಪ್ರಸ್ತಾವನೆಗಳಲ್ಲಿ ಸೇರ್ಪಡೆ ಮಾಡುವುದಕ್ಕೆ ಶಿಫಾರಸು ಮಾಡತಕ್ಕದ್ದು ಮತ್ತು ಆಯವ್ಯಯ ಪೂರ್ವ ಪ್ರಕ್ರಿಯೆಯಾಗಿ ಪರಿಶೀಲಿಸುವುದಕ್ಕಾಗಿ ಮತ್ತು ಅನುಮೋದಿಸುವುದಕ್ಕಾಗಿ, ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನ ಮುಂದೆ ಮಂಡಿಸುವುದಕ್ಕೆ ಅವುಗಳನ್ನು ಒಟ್ಟುಗೂಡಿಸತಕ್ಕದ್ದು.

**9. ನೋಡಲ್ ಇಲಾಖೆಗೆ ಆಡಳಿತಾತ್ಮಕ ಹಾಗೂ ತಾಂತ್ರಿಕ ನೆರವು.–** ಸರ್ಕಾರವು, ನೋಡಲ್ ಇಲಾಖೆಗೆ ವಹಿಸಲಾದ ಪ್ರಕಾರ್ಯಗಳನ್ನು ನಿರ್ವಹಿಸಲು ಹಾಗೂ ಕರ್ತವ್ಯಗಳನ್ನು ನೆರವೇರಿಸಲು ಹಾಗೂ ನೋಡಲ್ ಏಜೆನ್ಸಿಗೆ ನೆರವಾಗಲು, ಗೊತ್ತುಪಡಿಸಬಹುದಾದಂಥ ಆಡಳಿತಾತ್ಮಕ ಹಾಗೂ ತಾಂತ್ರಿಕ ಬೆಂಬಲ ಘಟಕದೊಂದಿಗೆ, ನೋಡಲ್ ಇಲಾಖೆಗೆ ಅಗತ್ಯವಾಗಿರುವ ತಾಂತ್ರಿಕ ಹಾಗೂ ಇತರ ಸಿಬ್ಬಂದಿಯನ್ನು ಒದಗಿಸತಕ್ಕದ್ದು.

**10. ಇಲಾಖೆ ಮಟ್ಟದ ಉಪ–ಯೋಜನೆ ನೆರವು ಘಟಕ.–** ರಾಜ್ಯ ಪರಿಷತ್ತು ಗುರುತಿಸಿದಂಥ ಇಲಾಖೆಗಳು, ಸಂಬಂಧಪಟ್ಟ ಅನುಸೂಚಿತ ಜಾತಿಗಳ ಉಪ–ಯೋಜನೆ ಹಾಗೂ ಬುಡಕಟ್ಟು ಉಪ–ಯೋಜನೆಯನ್ನು ನಿರ್ವಹಿಸಲು, ಗೊತ್ತುಪಡಿಸಬಹುದಾದಂಥ ಉಪ–ಯೋಜನಾ ನೆರವು ಘಟಕವನ್ನು ಸ್ಥಾಪಿಸಬಹುದು.

**11. ಜಿಲ್ಲೆಗಳಲ್ಲಿ ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆ ಸ್ಕೀಮುಗಳ ಅನುಷ್ಠಾನ.–** (1) ಪ್ರತಿಯೊಂದು ಜಿಲ್ಲೆಯಲ್ಲಿ ಜಿಲ್ಲಾ ಮೇಲ್ವಿಚಾರಣಾ ಸಮಿತಿ ಇರತಕ್ಕದ್ದು. ಅದು, ಜಿಲ್ಲೆಯಲ್ಲಿ ಅನುಸೂಚಿತ ಜಾತಿಗಳ ಉಪ ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆಯನ್ನು ಅನುಷ್ಠಾನಗೊಳಿಸಲು ಹೊಣೆಯಾಗಿರತಕ್ಕದ್ದು ಮತ್ತು ಅದು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು. ಎಂದರೆ:–

| | |
|---|---|
| (1) ಜಿಲ್ಲಾಧಿಕಾರಿ | – ಅಧ್ಯಕ್ಷರು |
| (2) ಜಿಲ್ಲೆಯೊಳಗೆ ಚುನಾವಣಾ ಕ್ಷೇತ್ರವನ್ನು ಹೊಂದಿರುವ ಜಿಲ್ಲೆಯ ಒಂದು ಭಾಗವನ್ನು ಅಥವಾ ಪೂರ್ತಿ ಜಿಲ್ಲೆಯನ್ನು ಪ್ರತಿನಿಧಿಸುವ ವಿಧಾನಸಭಾ ಸದಸ್ಯರು ಮತ್ತು ಜಿಲ್ಲೆಯೊಳಗೆ ಮತದಾರರೆಂದು ನೋಂದಾಯಿತರಾದ ವಿಧಾನ ಪರಿಷತ್ತಿನ ಸದಸ್ಯರು | – ಸದಸ್ಯರು |
| (3) ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿ | – ಸದಸ್ಯರು |
| (4) ಜಂಟಿ ನಿರ್ದೇಶಕರು, ಕೃಷಿ | – ಸದಸ್ಯರು |
| (5) ಕಾರ್ಯನಿರ್ವಾಹಕ ಇಂಜಿನಿಯರ್, ಪಿ.ಡಬ್ಲ್ಯೂಡಿ | – ಸದಸ್ಯರು |
| (6) ಜಿಲ್ಲಾ ಆರೋಗ್ಯಾಧಿಕಾರಿ | – ಸದಸ್ಯರು |
| (7) ಯಾವ ಇಲಾಖೆಗಳಿಗೆ ಹಂಚಿಕೆಗಳನ್ನು ಮಾಡಲಾಗಿದೆಯೋ ಆ ಸಂಬಂಧಪಟ್ಟ ಇಲಾಖೆಗಳ ವಿಶೇಷ ಆಹ್ವಾನಿತರಾಗಿರತಕ್ಕ ಜಿಲ್ಲಾ ಮಟ್ಟದ ಅಧಿಕಾರಿಗಳು | – ಸದಸ್ಯರು |
| (8) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | – ಎಸ್‌ಸಿಎಸ್‌ಪಿ ಸಂಚಾಲಕರು |
| (9) ಜಿಲ್ಲಾ ಬುಡಕಟ್ಟು ಕಲ್ಯಾಣಾಧಿಕಾರಿ ಅಥವಾ ಅನುಸೂಚಿತ ಪಂಗಡಗಳ ಪ್ರಾಜೆಕ್ಟ್ ನಿರ್ದೇಶಕರು | – ಟಿಎಸ್‌ಪಿ ಸಂಚಾಲಕರು |

(2) ಪ್ರತಿಯೊಂದು ಜಿಲ್ಲೆಯ ಜಿಲ್ಲಾ ಪಂಚಾಯತ್ ಹಾಗೂ ಜಿಲ್ಲಾ ಮೇಲ್ವಿಚಾರಣಾ ಸಮಿತಿಯು, ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆಯನ್ನು ಅನುಷ್ಠಾನಗೊಳಿಸಿರುವ ಬಗ್ಗೆ ನಿಯತಕಾಲಿಕವಾಗಿ ಪರಿಶೀಲಿಸತಕ್ಕದ್ದು.

**12. ಪರಿಣಾಮಕಾರಿ ಅನುಷ್ಠಾನ ಹಾಗೂ ಮೇಲ್ವಿಚಾರಣೆ ಮಾಡಲು ಸಾಂಸ್ಥಿಕವಾಗಿ ಬಲಪಡಿಸುವುದು.–** ಸರ್ಕಾರದ ಸಂಬಂಧಪಟ್ಟ ಇಲಾಖೆಗಳು ಪರಿಣಾಮಕಾರಿ ಅನುಷ್ಠಾನ ಹಾಗೂ ಮೇಲ್ವಿಚಾರಣೆಗಾಗಿ ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಅಗತ್ಯ ಮಾರ್ಗದರ್ಶನ, ಸಿಬ್ಬಂದಿವರ್ಗ ಮತ್ತು ತರಬೇತಿಯನ್ನು ಒದಗಿಸುವ ಮೂಲಕ ರಾಜ್ಯ ಮಟ್ಟದ ಹಾಗೂ ಜಿಲ್ಲಾ ಮಟ್ಟದ ಕಚೇರಿಗಳನ್ನು ಸಾಂಸ್ಥಿಕವಾಗಿ ಬಲಪಡಿಸಲು ಅವಶ್ಯಕವೆನಿಸಬಹುದಾದಂಥ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

## ಅಧ್ಯಾಯ – III

## ಅನುಸೂಚಿತ ಜಾತಿಗಳ ಉಪ–ಯೋಜನೆ ಹಾಗೂ ಬುಡಕಟ್ಟು ಉಪ–ಯೋಜನೆ ನಿಧಿಗಳು ಹಾಗೂ ಸ್ಕೀಮುಗಳಿಗಾಗಿ ಯೋಜನೆ ರೂಪಿಸುವುದು, ಸಂಪನ್ಮೂಲದ ಹಂಚಿಕೆ.

**13. ಯೋಜನಾ ವೆಚ್ಚದಿಂದ ಅನುಸೂಚಿತ ಜಾತಿ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆ ನಿಧಿಯನ್ನು ಮೀಸಲಿರಿಸುವುದು.–** ರಾಜ್ಯ ಸರ್ಕಾರವು, ಪ್ರತಿಯೊಂದು ಹಣಕಾಸು ವರ್ಷದಲ್ಲಿ, ರಾಜ್ಯದ ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡದ ಜನ ಸಂಖ್ಯೆಯ ಪ್ರಮಾಣಕ್ಕನುಸಾರವಾಗಿ ರಾಜ್ಯದ ಒಟ್ಟು ಯೋಜನಾ ವೆಚ್ಚದ ಒಂದು ಭಾಗವನ್ನು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಮೀಸಲಿರಿಸತಕ್ಕದ್ದು, ಅದನ್ನು ಅನುಸೂಚಿತ ಜಾತಿ ಉಪ–ಯೋಜನೆ ಹಾಗೂ ಬುಡಕಟ್ಟು ಉಪ ಯೋಜನೆ ನಿಧಿಯೆಂದು ಕರೆಯತಕ್ಕದ್ದು. ಒಂದು ನಿರ್ದಿಷ್ಟ ಹಣಕಾಸು ವರ್ಷಕ್ಕೆ ಹಂಚಿಕೆ ಮಾಡಿರುವ ಮೊತ್ತವು

ಖರ್ಚಾಗದೆ ಉಳಿದ ಸಂದರ್ಭದಲ್ಲಿ, ಅದನ್ನು ಮುಂದಿನ ಹಣಕಾಸು ವರ್ಷದ ಹಂಚಿಕೆಗೆ ಸೇರಿಸಬಹುದು, ಆದರೆ ಆ ವರ್ಷವೂ ಮೀರಿದ ನಂತರ ಅದನ್ನು ಮುಂದುವರೆಸತಕ್ಕದ್ದಲ್ಲ:

ಪರಂತು, ಮುಂದಿನ ಹಣಕಾಸು ವರ್ಷವು ಪ್ರಾರಂಭವಾಗುವ ಕನಿಷ್ಠ ಪಕ್ಷ ಎರಡು ತಿಂಗಳ ಮುಂಚೆ ಮೀಸಲಿರಿಸಬೇಕಾದ ನಿಧಿಯನ್ನು ನಿರ್ಧರಿಸತಕ್ಕದ್ದು :

ಮತ್ತೂ ಪರಂತು, ಅನುಸೂಚಿತ ಜಾತಿ ಉಪ–ಯೋಜನೆ ಹಾಗೂ ಬುಡಕಟ್ಟು ಉಪ–ಯೋಜನೆ ನಿಧಿ ವೆಚ್ಚವನ್ನು, ರಾಜ್ಯ ವಾರ್ಷಿಕ ಯೋಜನಾ ಅಂತಿಮ ವೆಚ್ಚಕ್ಕೆ ಅನುಸಾರವಾಗಿ ಪರಿಷ್ಕರಿಸತಕ್ಕದ್ದು:

ಅಲ್ಲದೆ, ಪರಂತು, ಅನುಸೂಚಿತ ಜಾತಿ ಉಪ–ಯೋಜನೆ ಹಾಗೂ ಬುಡಕಟ್ಟು ಉಪ ಯೋಜನೆ ನಿಧಿಯ ವೆಚ್ಚವನ್ನು, ಈ ಅಧಿನಿಯಮದಲ್ಲಿ ಇನ್ನು ಮುಂದೆ ನಿರ್ದಿಷ್ಟಪಡಿಸಿರುವ ರೀತಿಯಲ್ಲಿ ಲೆಕ್ಕಹಾಕತಕ್ಕದ್ದು.

**14. ಅನುಸೂಚಿತ ಜಾತಿ ಉಪ–ಯೋಜನೆ/ಬುಡಕಟ್ಟು ಉಪ ಯೋಜನೆ ನಿಧಿಯೆಂದು ಮೀಸಿಲಿರಿಸಿರುವ ಯೋಜನಾ ವೆಚ್ಚವನ್ನು ಇಲಾಖೆಗೆ ತಿಳಿಸುವುದು.–** ನೋಡಲ್ ಇಲಾಖೆಯು, ಪ್ರತಿಯೊಂದು ಆರ್ಥಿಕ ವರ್ಷದಲ್ಲಿ, ಸಂಬಂಧಪಟ್ಟ ಇಲಾಖಾವಾರು ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ ಯೋಜನೆಯನ್ನು ಸಿದ್ಧಪಡಿಸುವುದಕ್ಕಾಗಿ 11ನೇ ಪ್ರಕರಣದ ಮೇರೆಗೆ ಮೀಸಲಿರಿಸಿದಂಥ ಅನುಸೂಚಿತ ಜಾತಿ ಉಪ–ಯೋಜನೆ/ಬುಡಕಟ್ಟು ಉಪ ಯೋಜನೆ ನಿಧಿಯ ಪೈಕಿ ಒಂದು ತಾತ್ಕಾಲಿಕ ಯೋಜನಾ ವೆಚ್ಚವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಇತರ ಇಲಾಖೆಗಳಿಗೆ ತಿಳಿಸತಕ್ಕದ್ದು.

**15. ಅನುಸೂಚಿತ ಜಾತಿ ಉಪ–ಯೋಜನೆಗಳು ಹಾಗೂ ಬುಡಕಟ್ಟು ಉಪ–ಯೋಜನೆಗಳ ಅಡಿಯಲ್ಲಿ ಸೇರಿಸಬೇಕಾದ ಸ್ಕೀಮುಗಳು.–** ಇಲಾಖೆಗಳ ಉಪ–ಯೋಜನೆಗಳು ಈ ಅಧಿನಿಯಮ ಹಾಗೂ ಇದರ ಅಡಿಯಲ್ಲಿ ರಚಿಸಲಾದ ನಿಯಮಗಳಲ್ಲಿ ಹೇಳಲಾದ ನಿಬಂಧನೆಗಳಿಗನುಸಾರವಾಗಿ ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡಗಳ ವ್ಯಕ್ತಿಗಳಿಗೆ ಅಥವಾ ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡಗಳ ಕುಟುಂಬಗಳಿಗೆ ಅಥವಾ ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡಗಳ ಜನರ ವಾಸಸ್ಥಳಗಳಿಗೆ ಅಥವಾ ಬುಡಕಟ್ಟು ಪ್ರದೇಶಗಳಿಗೆ ನೇರ ಮತ್ತು ಪ್ರಮಾಣ ನಿರ್ಧರಿಸಬಹುದಾದ ಪ್ರಯೋಜನ ಒದಗಿಸುವಂಥ ಮತ್ತು ಅಭಿವೃದ್ಧಿಯಲ್ಲಿನ ಅಂತರಗಳನ್ನು ತುಂಬಲು ಸಾಧ್ಯಗೊಳಿಸುವಂಥ ಸ್ಕೀಮುಗಳನ್ನು ಮಾತ್ರ ಒಳಗೊಂಡಿರತಕ್ಕದ್ದು:

ಪರಂತು, ಸ್ಕೀಮುಗಳು, ವಾರ್ಷಿಕ ಹಾಗೂ ಪಂಚವಾರ್ಷಿಕ ಯೋಜನೆಗಳಿಗೆ ಹಾಗೂ ಯೋಜನಾ ಇಲಾಖೆಯು ಸೂಚಿಸಬಹುದಾದಂಥ ಕರ್ನಾಟಕ ಸರ್ಕಾರದ ಆದ್ಯತೆಗಳಿಗೆ ಅನುಗುಣವಾಗಿರತಕ್ಕದ್ದು.

**16. ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡಗಳನ್ನು ಸಾಮಾನ್ಯ ಸ್ಕೀಮುಗಳ ವ್ಯಾಪ್ತಿಯಲ್ಲಿ ಒಳಪಡಿಸುವ ಹೊಣೆಗಾರಿಕೆ.–** ಅನುಸೂಚಿತ ಜಾತಿಗಳು/ಅನುಸೂಚಿತ ವರ್ಗಗಳನ್ನು ಅವರ ಅರ್ಹತೆಗೆ ಅನುಗುಣವಾಗಿರುವ, ಪ್ರಗತಿಯಲ್ಲಿರುವ ಸಾಮಾನ್ಯ ಸ್ಕೀಮುಗಳ ವ್ಯಾಪ್ತಿಯಲ್ಲಿ ತರಲಾಗಿದೆ ಎಂಬುದನ್ನು ಇಲಾಖೆಗಳು ಖಚಿತಪಡಿಸಿಕೊಳ್ಳತಕ್ಕದ್ದು.

**17. ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆ ಸ್ಕೀಮುಗಳನ್ನು ರೂಪಿಸುವುದು ಮತ್ತು ಇಲಾಖೆಯು ಉಪ–ಯೋಜನೆಗಳನ್ನು ಸಿದ್ಧಪಡಿಸುವುದು.–** 14ನೇ ಪ್ರಕರಣದ ಮೇರೆಗೆ ಸೂಚನೆಯನ್ನು ಸ್ವೀಕರಿಸಿದ ಮೇಲೆ, ಪ್ರತಿಯೊಂದು ಇಲಾಖೆಯು, ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಅಭಿವೃದ್ಧಿಯಲ್ಲಿನ ಅಂತರಗಳನ್ನು ಅಂದಾಜು ಮಾಡಿದ ನಂತರ, ನಿಯಮಿಸಬಹುದಾದಂತೆ ಸಮಾಲೋಚನಾ ಪ್ರಕ್ರಿಯೆಯ ಮುಖಾಂತರ, ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಅಭಿವೃದ್ಧಿ ಅಗತ್ಯತೆಗಳಿಗೆ ಆದ್ಯತೆ ನೀಡತಕ್ಕದ್ದು ಮತ್ತು 14ನೇ ಪ್ರಕರಣದ ಮೇರೆಗೆ ಸೂಚಿಸಿದಂತೆ ರಾಜ್ಯ ಯೋಜನಾ ಆದ್ಯತೆಗಳ ವ್ಯಾಪ್ತಿಯಲ್ಲಿ ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆ ಸ್ಕೀಮುಗಳನ್ನು ರೂಪಿಸತಕ್ಕದ್ದು ಹಾಗೂ ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆ ಸ್ಕೀಮುಗಳನ್ನು ಒಳಗೊಂಡ ಉಪ–ಯೋಜನೆಗಳನ್ನು ತಯಾರಿಸತಕ್ಕದ್ದು.

**18. ವಾರ್ಷಿಕ ಯೋಜನೆಯಲ್ಲಿ ಸೇರ್ಪಡೆ ಮಾಡಲು ಉದ್ದೇಶಿಸಿದ ಉಪ–ಯೋಜನೆಗಳನ್ನು ಮೌಲ್ಯ ನಿರ್ಣಯಕ್ಕಾಗಿ ಸಲ್ಲಿಸುವುದು.–** ಈ ಅಧಿನಿಯಮದ ಮೇರೆಗೆ ಪ್ರತ್ಯೇಕವಾಗಿ ಅಧಿಸೂಚಿಸಿದ ಇಲಾಖೆಗಳನ್ನು ಹೊರತುಪಡಿಸಿ, ಪ್ರತಿಯೊಂದು ಇಲಾಖೆಯು, ನಿಯಮಿಸಬಹುದಾದಂಥ ಕಾಲಮಿತಿಯೊಳಗೆ ಮತ್ತು ಅಂಥ ನಮೂನೆಯಲ್ಲಿ, ಪ್ರತಿ ವರ್ಷವೂ ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆ ಸ್ಕೀಮುಗಳನ್ನು ಒಳಗೊಂಡ ಉಪ–ಯೋಜನೆಗಳನ್ನು ಸಂಬಂಧಪಟ್ಟ ನೋಡಲ್ ಏಜೆನ್ಸಿಯು ಮಾಡುವ ಮೌಲ್ಯ ನಿರ್ಣಯಕ್ಕಾಗಿ ಸಂಬಂಧಪಟ್ಟ ನೋಡಲ್ ಇಲಾಖೆಗಳಿಗೆ ಸಲ್ಲಿಸತಕ್ಕದ್ದು.

## ಅಧ್ಯಾಯ – IV

## ಅನುಸೂಚಿತ ಜಾತಿಗಳ ಉಪ–ಯೋಜನೆ/ಬುಡಕಟ್ಟು ಉಪ–ಯೋಜನೆ ನಿಧಿಯ ಮೌಲ್ಯ ನಿರ್ಣಯ, ಹಂಚಿಕೆ ಮತ್ತು ಉಪ–ಯೋಜನೆಗಳ ಅನುಮೋದನೆ

**19. ನೋಡಲ್ ಏಜೆನ್ಸಿಗಳಿಂದ ಅನುಸೂಚಿತ ಜಾತಿಗಳ ಉಪ–ಯೋಜನೆ ಮತ್ತು ಬುಡಕಟ್ಟು ಉಪ–ಯೋಜನೆ ಸ್ಕೀಮುಗಳ ಮೌಲ್ಯ ನಿರ್ಣಯ.–** ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆಯ ನೋಡಲ್ ಏಜೆನ್ಸಿಯು ಅನುಕ್ರಮವಾಗಿ ಇಲಾಖೆಗಳು ಸಲ್ಲಿಸಿದ ಅನುಸೂಚಿತ ಜಾತಿಗಳ ಉಪ–ಯೋಜನೆ ಸ್ಕೀಮುಗಳನ್ನು ಮತ್ತು ಬುಡಕಟ್ಟು ಉಪ–ಯೋಜನೆ ಸ್ಕೀಮುಗಳನ್ನು ಈ ಅಧಿನಿಯಮದ ಉಪಬಂಧಗಳಿಗೆ ಅನುಸಾರವಾಗಿವೆ ಎಂಬುದನ್ನು ಖಾತ್ರಿಪಡಿಸಲು ಮೌಲ್ಯ ನಿರ್ಣಯ ಕಾರ್ಯವನ್ನು ಕೈಗೊಳ್ಳತಕ್ಕದ್ದು.

## ಅಧ್ಯಾಯ – V

## ಬಜೆಟ್ ಏರ್ಪಾಟು, ಹಂಚಿಕೆ ಮತ್ತು ಅನುಷ್ಠಾನ ವ್ಯವಸ್ಥೆಯನ್ನು ಬಲಪಡಿಸುವುದು

**20. ಬಜೆಟ್ ಹಂಚಿಕೆಗಳು.–** ರಾಜ್ಯ ಪರಿಷತ್ತು ಅನುಮೋದಿಸಿದ ವಾರ್ಷಿಕ ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆಯನ್ನು ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆಗಾಗಿ ಇರುವ ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಯಡಿಯಲ್ಲಿ ಇಲಾಖೆಗಳ ಅನುದಾನಕ್ಕೆ ಸಂಬಂಧಿಸಿದ ಬೇಡಿಕೆಗಳಲ್ಲಿ ಸೇರ್ಪಡೆ ಮಾಡತಕ್ಕದ್ದು.

**21. ಆರ್ಥಿಕ ಇಲಾಖೆಯಲ್ಲಿ ಅನುಸೂಚಿತ ಜಾತಿಗಳ ಉಪ–ಯೋಜನೆ ಮತ್ತು ಬುಡಕಟ್ಟು ಉಪ–ಯೋಜನೆ ಕೋಶ.–** ಆರ್ಥಿಕ ಇಲಾಖೆಯು ನಿರ್ಧರಿಸಿದಂತೆ, ಒಟ್ಟಾರೆ ಸಾಧನೋಪಾಯ ಹಂತದ ಶಿಸ್ತಿನೊಳಗೆ, ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಬಜೆಟ್ ಅನುಷ್ಠಾನ ಮತ್ತು ಹಂಚಿಕೆಗೆ ಸಂಬಂಧಿಸಿದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಆರ್ಥಿಕ ಇಲಾಖೆಯಲ್ಲಿ ಒಂದು ಪ್ರತ್ಯೇಕ ಕೋಶ ಇರತಕ್ಕದ್ದು.

**22. ಆಯವ್ಯಯ ಬಿಡುಗಡೆ ಆದೇಶಗಳು.–** ಈ ಅಧಿನಿಯಮದ ಉಪಬಂಧಗಳಿಗನುಸಾರವಾಗಿ ರಾಜ್ಯ ವಿಧಾನ ಮಂಡಲವು ಆಯವ್ಯಯವನ್ನು ಅನುಮೋದಿಸಿದ ಕೂಡಲೇ ಅನುಸೂಚಿತ ಜಾತಿಗಳ ಉಪ–ಯೋಜನೆ ಅಥವಾ ಬುಡಕಟ್ಟು ಉಪ–ಯೋಜನೆಗಾಗಿ ಆಯವ್ಯಯ ಅಂದಾಜುಗಳಲ್ಲಿ ಒದಗಿಸಿದ ಮೊತ್ತಕ್ಕಾಗಿ, ಪ್ರತಿಯೊಂದು ಇಲಾಖೆಗೆ ಆಯವ್ಯಯ ಬಿಡುಗಡೆ ಆದೇಶಗಳನ್ನು ಹೊರಡಿಸತಕ್ಕದ್ದು.

## ಅಧ್ಯಾಯ–VI

## ಅನುಸೂಚಿತ ಜಾತಿಗಳ ಉಪಯೋಜನೆ ಅಥವಾ ಬುಡಕಟ್ಟು ಉಪಯೋಜನೆಯ ಅನುಷ್ಠಾನದಲ್ಲಿ ಪಾರದರ್ಶಕತೆ ಹಾಗೂ ಉತ್ತರದಾಯಿತ್ವ

**23. ಪಾರದರ್ಶಕತೆ ಮತ್ತು ಉತ್ತರದಾಯಿತ್ವ.–** (1) ಪ್ರತಿಯೊಂದು ಇಲಾಖೆಯೂ, ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಸ್ಕೀಮುಗಳ ಅನುಷ್ಠಾನದ ಎಲ್ಲಾ ಹಂತಗಳಲ್ಲಿಯೂ ಪಾರದರ್ಶಕತೆ ಹಾಗೂ ಉತ್ತರದಾಯಿತ್ವ ಇರುವಂತೆ ನೋಡಿಕೊಳ್ಳತಕ್ಕದ್ದು.

(2) ಪ್ರತಿಯೊಂದು ಇಲಾಖೆಯು ಸಾರ್ವಜನಿಕ ಕ್ಷೇತ್ರದಲ್ಲಿ ನಿಯಮಿಸಬಹುದಾದ ರೀತಿಯಲ್ಲಿ ದಸ್ತಾವೇಜುಗಳು ಲಭ್ಯವಿರುವಂತೆ ಮಾಡತಕ್ಕದ್ದು.

**24. ಪ್ರೋತ್ಸಾಹಧನ ಮತ್ತು ದಂಡನೆಗಳು.–** ಸರ್ಕಾರವು ಪ್ರಶಂಸಾರ್ಹವಾದ ಕಾರ್ಯಸಾಧನೆಗೆ ಪ್ರೋತ್ಸಾಹಧನವನ್ನು ನೀಡಲು ಸೂಕ್ತವಾದ ಸ್ಕೀಮೊಂದನ್ನು ರೂಪಿಸತಕ್ಕದ್ದು. ಸಾರ್ವಜನಿಕ ನೌಕರನಾಗಿರುವ ಯಾರೇ ಕಾರ್ಯನಿರ್ವಾಹಕನು ಅಥವಾ ಅಧಿಕಾರಿಯು ಈ ಅಧಿನಿಯಮದ ಮೇರೆಗೆ ತಾನು ನಿರ್ವಹಿಸಬೇಕೆಂದು ಅಗತ್ಯಪಡಿಸಿರುವ ತನ್ನ ಕರ್ತವ್ಯಗಳನ್ನು ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದರೆ, ಅವನು ಸರ್ಕಾರಿ ನೌಕರರು ಮತ್ತು ಕಾರ್ಯನಿರ್ವಾಹಕರಿಗೆ ಅನ್ವಯವಾಗಬಹುದಾದ ಸಂಬಂಧಪಟ್ಟ ಸೇವಾ/ಶಿಸ್ತುಪಾಲನಾ ನಿಯಮಗಳ ಮೇರೆಗೆ ಶಿಸ್ತಿನ ಕ್ರಮಕ್ಕೆ ಒಳಗಾಗತಕ್ಕದ್ದು. ಅಥವಾ ಅಂಥ ನಿರ್ಲಕ್ಷ್ಯದ ತೀವ್ರತೆಯನ್ನವಲಂಬಿಸಿ ಅನುಸೂಚಿತ ಜಾತಿಗಳ ಉಪಯೋಜನೆ/ಬುಡಕಟ್ಟು ಉಪಯೋಜನೆಯ ನೋಡಲ್ ಏಜೆನ್ಸಿಯು ನಿರ್ಧರಿಸುವಂತೆ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ದಂಡಿತನಾಗತಕ್ಕದ್ದು

**25. ಅಪರಾಧದ ಸಂಜ್ಞೇಯತೆ.–** 24ನೇ ಪ್ರಕರಣದ ಮೇರೆಗೆ ನಿರ್ದಿಷ್ಟಪಡಿಸಿದ ಅಪರಾಧಗಳು ಸಂಜ್ಞೇಯವಲ್ಲದ ಅಪರಾಧಗಳಾಗಿರತಕ್ಕದ್ದು. ಗೊತ್ತುಪಡಿಸಿದ ಪ್ರಾಧಿಕಾರವು ಲಿಖಿತ ರೂಪದಲ್ಲಿ ನೀಡಿದ ದೂರಿನ ಮೇಲೆ ಹೊರತು, ಯಾವುದೇ ನ್ಯಾಯಾಲಯವು ಸದರಿ ಅಪರಾಧದ ಸಂಜ್ಞೇಯತೆಯನ್ನು ತೆಗೆದುಕೊಳ್ಳತಕ್ಕದ್ದಲ್ಲ.

**26. ರಾಜ್ಯ ವಿಧಾನಮಂಡಲದ ಮುಂದೆ ವಾರ್ಷಿಕ ವರದಿಯನ್ನು ಮಂಡಿಸುವುದು.–** ನೋಡಲ್ ಏಜೆನ್ಸಿಯು, ವರದಿ ನೀಡುವ ಹಣಕಾಸು ವರ್ಷದ ಅವಧಿಯಲ್ಲಿನ ಇಲಾಖಾವಾರು ಸಾಧನೆಗಳನ್ನು ಮತ್ತು ಬಳಕೆಯಾಗದೆ ಉಳಿದ ನಿಧಿಗಳನ್ನು ಒಳಗೊಂಡ ಅನುಸೂಚಿತ ಜಾತಿಗಳ ಉಪಯೋಜನೆ ಅಥವಾ ಬುಡಕಟ್ಟು ಉಪಯೋಜನೆಯ ಅನುಷ್ಠಾನದ ಫಲಿತಾಂಶ ಕುರಿತ ಒಂದು ವಾರ್ಷಿಕ ವರದಿಯನ್ನು ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸತಕ್ಕದ್ದು.

**27. ನಿಯಮ ರಚನಾಧಿಕಾರ.–** (1) ಈ ಅಧಿನಿಯಮದ ಇತರ ಉಪಬಂಧಗಳಿಗೊಳಪಟ್ಟು, ಸರ್ಕಾರವು, ಪೂರ್ವ ಪ್ರಕಟಣೆಯ ನಂತರ, ಅಧಿಸೂಚನೆಯ ಮೂಲಕ, ಈ ಅಧಿನಿಯಮದ ಎಲ್ಲಾ ಅಥವಾ ಯಾವುವೇ ಉದ್ದೇಶಗಳನ್ನು ಕಾರ್ಯಗತಗೊಳಿಸುವುದಕ್ಕಾಗಿ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಹಿಂದೆ ಹೇಳಿದ ಅಧಿಕಾರದ ಸಾಮಾನ್ಯಾನ್ವಯತೆಗೆ ಬಾಧಕವಾಗದಂತೆ ಅಂಥ ನಿಯಮಗಳು ಈ ಮುಂದಿನ ಎಲ್ಲಾ ಅಥವಾ ಯಾವುವೇ ವಿಷಯಗಳಿಗಾಗಿ ಉಪಬಂಧ ಕಲ್ಪಿಸಬಹುದು, ಎಂದರೆ:–

(ಎ) 2ನೇ ಪ್ರಕರಣದ ಮೇರೆಗೆ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿಯಲ್ಲಿನ ಅಂತರಗಳನ್ನು ನಿರ್ಧರಿಸುವುದು;

(ಬಿ) ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿಗಾಗಿ ರಾಜ್ಯ ಪರಿಷತ್ತಿನಲ್ಲಿನ ವ್ಯವಹಾರದ ನಿಬಂಧನೆ ಮತ್ತು ನಿರ್ವಹಣೆ;

(ಸಿ) 3ನೇ ಪ್ರಕರಣದ ಮೇರೆಗೆ ರಾಜ್ಯ ಪರಿಷತ್ತಿನ ಸರ್ಕಾರೇತರ ಸದಸ್ಯರ ಅರ್ಹತೆ, ಅನರ್ಹತೆ ಮತ್ತು ಇತರ ಭತ್ಯೆಗಳು;

(ಡಿ) 6ನೇ ಪ್ರಕರಣದ ಮೇರೆಗೆ ನೋಡಲ್ ಏಜೆನ್ಸಿಯು ವೆಬ್ ಪೋರ್ಟಲ್‌ಅನ್ನು ನಿರ್ವಹಿಸುವುದು;

(ಇ) 9ನೇ ಪ್ರಕರಣದ ಮೇರೆಗೆ ಅನುಸೂಚಿತ ಜಾತಿಗಳ ಉಪಯೋಜನೆ/ಬುಡಕಟ್ಟು ಉಪಯೋಜನೆಗಾಗಿ ನೋಡಲ್ ಇಲಾಖೆಯಲ್ಲಿ ಆಡಳಿತಾತ್ಮಕ ಮತ್ತು ತಾಂತ್ರಿಕ ನೆರವಿನ ಘಟಕದ ರಚನೆ;

(ಎಫ್) 10ನೇ ಪ್ರಕರಣದ ಮೇರೆಗೆ ಇಲಾಖಾ ಮಟ್ಟದಲ್ಲಿ ಉಪಯೋಜನೆ ನೆರವಿನ ಘಟಕವನ್ನು ರಚಿಸುವುದು;

(ಜಿ) 12ನೇ ಪ್ರಕರಣದ ಮೇರೆಗೆ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆಯ ಪರಿಣಾಮಕಾರಿ ಅನುಷ್ಠಾನವನ್ನು ನೋಡಿಕೊಳ್ಳುವುದು, ಜಾಗೃತಿ, ಸಮೂಹ ಸಂಪರ್ಕ ಕಾರ್ಯಕ್ರಮ, ಸಾಮಾಜಿಕ ಲೆಕ್ಕ ಪರಿಶೋಧನೆ ಮತ್ತು ಮೇಲ್ವಿಚಾರಣೆಗಾಗಿ ರಾಜ್ಯ, ಜಿಲ್ಲಾ ಮತ್ತು ಉಪಜಿಲ್ಲಾ ಮಟ್ಟದಲ್ಲಿ ಸಾಂಸ್ಥಿಕ ಬಲವರ್ಧನೆ ಮಾಡುವುದು;

(ಹೆಚ್) 13ನೇ ಪ್ರಕರಣದ ಮೇರೆಗೆ ಯೋಜನಾ ವೆಚ್ಚಗಳಿಂದ ಅನುಸೂಚಿತ ಜಾತಿಗಳ ಉಪಯೋಜನೆ/ಬುಡಕಟ್ಟು ಉಪಯೋಜನೆ ನಿಧಿಗಳನ್ನು ಮೀಸಲಿಡುವುದು;

(ಐ) 18ನೇ ಪ್ರಕರಣದ ಮೇರೆಗೆ ಇಲಾಖೆಗಳು ಅನುಸೂಚಿತ ಜಾತಿಗಳ ಉಪಯೋಜನೆ/ಬುಡಕಟ್ಟು ಉಪಯೋಜನೆ ಸ್ಕೀಮುಗಳನ್ನು ಗುರುತಿಸುವುದು ಮತ್ತು ಉಪಯೋಜನೆಗಳನ್ನು ತಯಾರಿಸುವುದು;

(ಜೆ) 19ನೇ ಪ್ರಕರಣದ ಮೇರೆಗೆ ನೋಡಲ್ ಇಲಾಖೆಗಳು ಮೌಲ್ಯ ನಿರ್ಣಯಕ್ಕಾಗಿ ಅನುಸೂಚಿತ ಜಾತಿಗಳ ಉಪಯೋಜನೆ/ಬುಡಕಟ್ಟು ಉಪಯೋಜನೆಯ ಬಜೆಟ್ ಪ್ರಸ್ತಾವವನ್ನು ತಯಾರಿಸುವುದು;

(ಕೆ) 22ನೇ ಪ್ರಕರಣದ ಮೇರೆಗೆ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಅಡಿಯಲ್ಲಿ ವೆಚ್ಚ ಮೇಲ್ವಿಚಾರಣೆಗಾಗಿ ಹಣಕಾಸು ಇಲಾಖೆಯನ್ನು ಬಲಪಡಿಸುವುದು; ಮತ್ತು

(ಎಲ್) 23ನೇ ಪ್ರಕರಣದ ಮೇರೆಗೆ ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆಯ ಅನುಷ್ಠಾನದಲ್ಲಿ ಪಾರದರ್ಶಕತೆ ಮತ್ತು ಉತ್ತರದಾಯಿತ್ವ ಇರುವಂತೆ ನೋಡಿಕೊಳ್ಳುವುದಕ್ಕೆ ಸಂಬಂಧಿಸಿದ ಪ್ರಕ್ರಿಯೆಗಳು.

(3) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲವು ಅಧಿವೇಶನದಲ್ಲಿರುವಾಗ, ಅದರ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನದಲ್ಲಿ ಅಥವಾ ಎರಡು ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ಅದರ ನಿಕಟ ತರುವಾಯದ ಅಧಿವೇಶನವು ಮುಕ್ತಾಯವಾಗುವ ಮೊದಲು ಎರಡೂ ಸದನಗಳು ಆ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮವನ್ನು ರಚಿಸಬಾರದೆಂದು ಒಪ್ಪಿದರೆ, ಆ ತರುವಾಯ, ಆ ನಿಯಮವು ಹಾಗೆ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದರೆ, ಅಂಥ ಯಾವುದೇ ಮಾರ್ಪಾಟು ಅಥವಾ ರದ್ದತಿಯು ಆ ನಿಯಮದ ಅಡಿಯಲ್ಲಿ ಆ ಮೊದಲು ಮಾಡಿದ ಯಾವುದೇ ಕಾರ್ಯದ ಸಿಂಧುತ್ವಕ್ಕೆ ಬಾಧಕ ಉಂಟುಮಾಡತಕ್ಕದ್ದಲ್ಲ.

**28. ತೊಂದರೆಗಳ ನಿವಾರಣಾಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೆ ತರುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು, ರಾಜ್ಯಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ಆ ತೊಂದರೆಯನ್ನು ನಿವಾರಿಸಲು ಅಗತ್ಯವೆಂದು ಅಥವಾ ಯುಕ್ತವೆಂದು ಕಂಡು ಬರುವಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವುದೇ ಅಧಿಕಾರವನ್ನು ಚಲಾಯಿಸತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ಕೂಡಲೇ ಆದಷ್ಟು ಬೇಗನೆ ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಭಾ.ಭೀ. ಪತ್ತಾರ**
ಸರ್ಕಾರದ ವಿಶೇಷ ಕಾರ್ಯದರ್ಶಿ
(ಸಂಸದೀಯ ವ್ಯವಹಾರಗಳು)
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨೭, ೨೦೧೩ (ಪುಷ್ಯ ೬, ಶಕ ವರ್ಷ ೧೯೩೫) | ನಂ. ೧೩೭೬ |
|---|---|---|
| Part – IV-A | Bangalore, Friday, December 27, 2013 (Pushya 6, Shaka Varsha 1935) | No. 1376 |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 317 ಎಂಆರ್ಇ 2013, ಬೆಂಗಳೂರು, ದಿನಾಂಕ: 26–12–2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix)** ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶಿಗ್ಗಾಂವ್ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ :

| ಕ್ರ. ಸಂ. | ಸದಸ್ಯರ ಹೆಸರು<br>ಶ್ರೀಯುತರು |
|---|---|
| (1) | ಶ್ರೀ ಹನುಮರಡ್ಡಿ ಈಶ್ವರಪ್ಪ ನಡವಿನಮನಿ, ಸಾ: ಮಡ್ಲಿ, ತಾ: ಶಿಗ್ಗಾಂವ. |
| (2) | ಶ್ರೀ ಮೌಲಾಸಾಬ ಮಹಬೂಬಸಾಬ್ ತಡಸ, ಸಾ: ಕುನ್ನೂರ, ತಾ: ಶಿಗ್ಗಾಂವ. |
| (3) | ಶ್ರೀ ನೀಲಕಂಠಗೌಡ ಚನ್ನಬಸಗೌಡ ಪಾಟೀಲ, ಸಾ: ಕುನ್ನೂರ, ತಾ: ಶಿಗ್ಗಾಂವ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV-A | ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨೭, ೨೦೧೩ (ಪುಷ್ಯ ೬, ಶಕ ವರ್ಷ ೧೯೩೫) | ನಂ. ೧೩೭೭ |
| Part – IV-A | Bangalore, Friday, December 27, 2013 (Pushya 6, Shaka Varsha 1935) | No. 1377 |


## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 342 ಎಂಆರ್ಇ 2013, ಬೆಂಗಳೂರು, ದಿನಾಂಕ: 26–12–2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ** (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, **1966** ರ ಕಲಂ 11(1)(**ix**) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಹುಣಸೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ** ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿದೆ :

| ಕ್ರ. ಸಂ. | ಸದಸ್ಯರ ಹೆಸರು<br>ಶ್ರೀಯುತರು |
|---|---|
| (1) | ಶ್ರೀ ರಮೇಶ ಬಿನ್ ವಂಗಯ್ಯ,<br>ಅಸ್ವಾಳು ಗ್ರಾಮ ಮತ್ತು ಅಂಚೆ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ. |
| (2) | ಶ್ರೀ ಹೆಚ್.ಸಿ.ರಾಧಾಕೃಷ್ಣ ಬಿನ್ ಚಿಕ್ಕಮಾದಶೆಟ್ಟಿ,<br>ಹನಗೂಡು ಗ್ರಾಮ ಮತ್ತು ಅಂಚೆ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ. |
| (3) | ಶ್ರೀ ಮುಜಿಬರ್ ರೆಹಮಾನ್ ಬಿನ್ ಎಂ.ಎ ವಾಜಿದ್,<br>ನಂ.1822/ಎ, ನಿಜಾಂ ಮೊಹಲ್ಲಾ, ಹುಣಸೂರು ಪಟ್ಟಣ, ಮೈಸೂರು ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ


| | | |
|---|---|---|
| ಭಾಗ – IV-A | ಬೆಂಗಳೂರು, ಶನಿವಾರ, ಡಿಸೆಂಬರ್ ೨೮, ೨೦೧೩ (ಪುಷ್ಯ ೭, ಶಕ ವರ್ಷ ೧೯೩೫) | ನಂ. ೧೩೭೮ |
| Part – IV-A | Bangalore, Saturday, December 28, 2013 (Pushya 7, Shaka Varsha 1935) | No. 1378 |


## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 366 ಎಂಆರ್ಇ 2013, ಬೆಂಗಳೂರು, ದಿನಾಂಕ: 28–12–2013**

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ** (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, **1966** ರ ಕಲಂ **10** ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ 11 ಜನರನ್ನು ಹೊಳಲ್ಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ **ಸದಸ್ಯರುಗಳನ್ನಾಗಿ** ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ :

| ಕ್ರ. ಸಂ. | ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ | ಹುದ್ದೆ |
|---|---|---|
| 1. | ಹೆಚ್.ಡಿ. ರಂಗಯ್ಯ ಬಿನ್ ದಾಸಪ್ಪ,<br>ಹೊರಕೆರೆದೇವರಪುರ ಗ್ರಾಮ, ಹೊರಕೆರೆದೇವರಪುರ ಅಂಚೆ, ಹೊಳಲ್ಕೆರೆ ತಾ॥ | ಅಧ್ಯಕ್ಷರು |
| 2. | ಎಂ.ಎಸ್. ರವಿಕುಮಾರ್ ಬನ್ ಎಂ.ಡಿ. ಷಡಕ್ಷರಪ್ಪ, ಮುತ್ತಗದೂರು ಅಂಚೆ, ಹೊಳಲ್ಕೆರೆ ತಾಲ್ಲೂಕು | ಉಪಾಧ್ಯಕ್ಷರು |
| 3. | ಕೆ.ಪಿ. ಬೋರಪ್ಪ ಬಿನ್ ಪರಮೇಶ್ವರಪ್ಪ, ಕಾಗಳಗೆರೆ ಗ್ರಾಮ, ಮುತ್ತುಗದೂರು ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |
| 4. | ಕೆ. ಶಿವಪ್ಪ ಬಿನ್ ಕರಿಯಪ್ಪ, ಗುಡ್ಡದಸಾಂತೇನಹಳ್ಳಿ ಗ್ರಾಮ, ಆವಿನಹಟ್ಟಿ ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |
| 5. | ಎಂ.ಎಸ್. ನಾಗಪ್ಪ ಬಿನ್ ಸಿದ್ದಪ್ಪ, ತಾಳಿಕಟ್ಟೆ ಗ್ರಾಮ, ತಾಳಿಕಟ್ಟೆ ಅಂಚೆ, ಹೊಳಲ್ಕೆರೆ ತಾಲ್ಲೂಕು. | ಸದಸ್ಯರು |
| 6. | ಟಿ.ಎಸ್. ರಾಜಪ್ಪ ಬಿನ್ ಶರಣಪ್ಪ, ತಿರುಮಲಾಪುರ ಗ್ರಾಮ, ಅಮೃತಾಪುರ ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |
| 7. | ಅಂಬಿಕಾ ಕೋಂ ಮಲ್ಲೇಶ್, ಮಲ್ಲಾಡಿಹಳ್ಳಿ ಗ್ರಾಮ, ಮಲ್ಲಾಡಿಹಳ್ಳಿ ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |

| ಕ್ರ. ಸಂ. | ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ | ಹುದ್ದೆ |
|---|---|---|
| 8. | ಎಂ. ಅಬ್ದುಲ್ ಕಲಾಂ ಬಿನ್ ಬಿ. ಮಹಮದ್ ಸಾಬ್,<br>ಚಿಕ್ಕಜಾಜೂರು ಗ್ರಾಮ, ಚಿಕ್ಕಜಾಜೂರು ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |
| 9. | ಜಿ.ಎನ್. ಹಳ್ಳಪ್ಪ ಬಿನ್ ಗೌಡ್ರ ಸಂಗಪ್ಪ, ಚಿತ್ರಹಳ್ಳಿ ಗೊಲ್ಲರಹಟ್ಟಿ ಗ್ರಾಮ, ಚಿತ್ರಹಳ್ಳಿ ಅಂಚೆ, ಹೊಳಲ್ಕೆರೆ ತಾಲ್ಲೂಕು | ಸದಸ್ಯರು |
| 10. | ಎಂ.ಎನ್. ಕಲ್ಲೇಶಪ್ಪ ಬಿನ್ ನಾಗರಾಜಪ್ಪ, ದಂಡಿಗೇನಹಳ್ಳಿ ಗ್ರಾಮ, ಕಾಳಘಟ್ಟ ಅಂಚೆ, ಹೊಳ್ಳಲ್ಕೆರೆ ತಾಲ್ಲೂಕು | ಸದಸ್ಯರು |
| 11. | ಜಿ.ಜೆ. ಮುರುಗೇಶ್ ಬಿನ್ ಜಿ.ಎಂ. ಜಯರಾಜಪ್ಪ,<br>ಹಿರೇಎಮ್ಮಿಗನೂರು ಗ್ರಾಮ, ಹಿರೇಎಮ್ಮಿಗನೂರು ಅಂಚೆ, ಹೊಳಲ್ಕೆರೆ ತಾ॥ | ಸದಸ್ಯರು |

**ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10(2)** ರಲ್ಲಿನ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮೇಲಿನಂತೆ ನಾಮ ನಿರ್ದೇಶನಗೊಂಡಿರುವ ಸದಸ್ಯರುಗಳ ಪೈಕಿ, "**ಹೆಚ್.ಡಿ. ರಂಗಯ್ಯ ಬಿನ್ ದಾಸಪ್ಪ, ಹೊರಕೆರೆದೇವರಪುರ ಗ್ರಾಮ, ಹೊರಕೆರೆದೇವರಪುರ ಅಂಚೆ, ಹೊಳಲ್ಕೆರೆ ತಾ॥**" ಇವರನ್ನು **ಅಧ್ಯಕ್ಷರನ್ನಾಗಿ** ಹಾಗೂ "**ಶ್ರೀ ಎಂ.ಎಸ್. ರವಿಕುಮಾರ್ ಬಿನ್ ಎಂ.ಡಿ. ಷಡಕ್ಷಾರಪ್ಪ, ಮುತ್ತಗದೂರು ಅಂಚೆ, ಹೊಳಲ್ಕೆರೆ ತಾ॥**" ಇವರನ್ನು **ಉಪಾಧ್ಯಕ್ಷರನ್ನಾಗಿ** ಸದರಿ ಸಮಿತಿಗೆ ನಾಮಕರಣ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಈ. ಪಾಪಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–1
ಸಹಕಾರ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ – III<br>**Part – III** | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫)<br>**Bangalore, Monday, December 30, 2013 (Pushya 9, Shaka Varsha 1935)** | ನಂ. ೧೩೭೯<br>**No. 1379** |
|---|---|---|



## KARNATAKA ELECTRICITY REGULATORY COMMISSION BANGALORE - 560 001

## NOTIFICATION

**No. Y/03/4, Bangalore, dated: 30th DECEMBER 2013**

**Draft Notification for Comments and suggestions from Stakeholders**

Karnataka Electricity Regulatory Commission (Terms and Conditions for Open Access) (Second Amendment) Regulations, 2013

**PREAMBLE:**

In exercise of the powers conferred on it by the Electricity Act 2003, Karnataka Electricity Regulatory Commission has notified the Karnataka Electricity Regulatory Commission (Terms and Conditions for Open Access) Regulations, 2004 on 12.11.2004 which is published in the Karnataka Gazette on 16.12.2004. The Commission has issued amendments to these Regulations vide notification No.Y/03/4 dated 31st May 2006 to effect certain amendments to the existing Regulations.

Whereas, it is noticed that in the existing Regulations, there is no specific provision to disallow Open Access to generating company even if there is a subsisting PPA between generating company and distribution licensee and in order to remove such difficulty, the Commission proposes to amend the KERC (Terms and Conditions for Open Access) Regulations, 2004.

Therefore, the draft amendment is placed for publication through notice board of the Commission and of the utilities and also through the Commission's **website:www.karnataka.gov.in/kerc.** Interested persons/stakeholders are requested to send their comments/objections to the proposed amendments to the Secretary, KERC, 9/2, 7th Floor, Mahalakshmi Chambers, M.G. Road, Bangalore-560001 on or before 25th JANUARY 2014.

## DRAFT AMENDMENTS

In exercise of the powers conferred on it by Section 181 read with Sections 39(2)(d),40(c),42(2),42(3) and 86(1)(c) of the Electricity Act, 2003 and all other powers enabling in this behalf, the Karnataka Electricity Regulatory Commission, makes the following Regulations further to amend KERC(Terms and Conditions for Open Access) Regulations, 2004.

1. **Short Title & Commencement**

   i. These regulations shall be called the Karnataka Regulatory Commission (Terms and Conditions for Open Access) (Second Amendment) Regulations, 2013.

   ii. These Regulations shall come into force from the date of publication in the official Gazette of Karnataka.

iii. These Regulations shall apply to the Open Access customers for use of intra-state transmission system/s and/or distribution system/s of licensees in the State, including such system/s, which are incidental to inter-state transmission of electricity.

**2. Insertion of Regulation 4A as below, after existing Regulation 4**

**4A. Bar for Open Access:** Notwithstanding anything contained in these Regulations, any generating company having subsisting Power Purchase Agreement with the distribution licensee, shall not be entitled to Open Access for the capacity (quantum of power) for which PPA is entered into, except in accordance with the terms of such PPA.

By order of the Commission

**N. SRIRAMAN**
Secretary
Karnataka Electricity Regulatory Commission

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫) | ನಂ. ೧೩೮೦ |
| **Part – IV** | **Bangalore, Monday, December 30, 2013 (Pushya 9, Shaka Varsha 1935)** | **No. 1380** |

## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ, ನಂ.8, ಕನ್ನಿಂಗ್ ಹ್ಯಾಂ ರಸ್ತೆ. ಬೆಂಗಳೂರು–560052

**ಆದೇಶ**

**ಸಂಖ್ಯೆ ರಾಚುಆ.179.ಇಯುಬಿ.2013, ಬೆಂಗಳೂರು ದಿನಾಂಕ: 30–12–2013**

ರಾಜ್ಯ ಚುನಾವಣಾ ಆಯೋಗವು ಮುಲ್ಕಿ ಪಟ್ಟಣ ಪಂಚಾಯತಿ ಸಾರ್ವತ್ರಿಕ ಚುನಾವಣೆಯನ್ನು ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977 ರ ನಿಯಮ 8 ರನ್ವಯ ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಚುನಾವಣೆಯನ್ನು ನಡೆಸಲು ಆದೇಶಿಸಿದೆ. ಚುನಾವಣಾ ವೇಳಾಪಟ್ಟಿ

| | | |
|---|---|---|
| 1 | ಜಿಲ್ಲಾಧಿಕಾರಿಗಳು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 06–01–2014<br>ಸೋಮವಾರ |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 13–01–2014<br>ಸೋಮವಾರ |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 16–01–2014<br>ಗುರುವಾರ |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 18–01–2014<br>ಶನಿವಾರ |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸ ಬೇಕಾದ ದಿನಾಂಕ ಮತ್ತು ದಿನ | 27–01–2014<br>ಸೋಮವಾರ |
| 6 | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 27–01–2014<br>ಸೋಮವಾರ |
| 7 | ಮರು ಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 28–01–2014<br>ಮಂಗಳವಾರ |
| 8 | ಮತಗಳ ಎಣಿಕೆಯು ಬೆಳಿಗ್ಗೆ 8.00 ಘಂಟೆಯಿಂದ ಪಟ್ಟಣ ಪಂಚಾಯತಿ ವ್ಯಾಪ್ತಿಯಲ್ಲಿ | 29–01–2014<br>ಬುಧವಾರ |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯ ಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 29–01–2014<br>ಬುಧವಾರ |

ಜಿಲ್ಲಾಧಿಕಾರಿಗಳು ಆಯೋಗವು ಆದೇಶಿಸಿರುವ ಚುನಾವಣಾ ವೇಳಾ ಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಾಲಿಟೀಸ್ (ಕೌನ್ಸಿಲರ್‌ಗಳ ಚುನಾವಣೆ) ನಿಯಮಗಳು, 1977 ರ ನಿಯಮ 8 ರ ಪ್ರಕಾರ ಮುಲ್ಕಿ ಪಟ್ಟಣ ಪಂಚಾಯತಿಯ ಚುನಾವಣಾ ಅಧಿಸೂಚನೆಯನ್ನು ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಜಿಲ್ಲಾಧಿಕಾರಿಗಳ

ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರೆ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಅವರಿಗೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು.

ಸದಾಚಾರ ಸಂಹಿತೆಯು ಜಿಲ್ಲಾಧಿಕಾರಿಗಳು ವೇಳಾಪಟ್ಟಿಯನ್ನು ಅಧಿಸೂಚಿಸುವ ಅಂದರೆ ದಿನಾಂಕ: 06–01–2014 ರಿಂದ ಜಾರಿಗೆ ಬರಲಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: 29–01–2014 ವರೆಗೆ ಚುನಾವಣೆ ನಡೆಯುವ ಮುಲ್ಕಿ ಪಟ್ಟಣ ಪಂಚಾಯತಿ ವಾರ್ಡುಗಳ ವ್ಯಾಪ್ತಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು

ಆದೇಶಾನುಸಾರ

**ಡಾ: ಆಶಾ.ಎಸ್.**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫) | ನಂ. ೧೩೮೧ |
|---|---|---|
| Part – IV-A | Bangalore, Monday, December 30, 2013 (Pushya 9, Shaka Varsha 1935) | No. 1381 |


## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 102 ಸೇನಿಡಿ 2013, ಬೆಂಗಳೂರು, ದಿನಾಂಕ: 30–12–2013**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) 3ನೇ ಪ್ರಕರಣದ (1)ನೇ ಉಪಪ್ರಕರಣವನ್ನು 8ನೇ ಪ್ರಕರಣದೊಡನೆ ಓದಿಕೊಂಡಂತೆ ಇದರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1992ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಉದ್ದೇಶಿಸಿದ್ದು, ಸದರಿ ಅಧಿನಿಯಮದ 3ನೇ ಪ್ರಕರಣದ (2)ನೇ ಉಪ–ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಸದರಿ ಕರಡನ್ನು ಈ ಮೂಲಕ ಪ್ರಕಟಿಸಿ ಇದರಿಂದ ಬಾಧಿತರಾಗಬಹುದಾದಂಥ ಎಲ್ಲಾ ವ್ಯಕ್ತಿಗಳ ಗಮನಕ್ಕೆ ತರಲಾಗಿದೆ ಮತ್ತು ಸದರಿ ಕರಡು ನಿಯಮಗಳನ್ನು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ನಂತರ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯಗೊಳ್ಳುವ ಮೊದಲು ಯಾವೊಬ್ಬ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು–560 001 ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

### ಕರಡು ನಿಯಮಗಳು

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2013 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1992ರ ಅನುಸೂಚಿಯಲ್ಲಿ

(i) ಕ್ರಮ ಸಂಖ್ಯೆ:27ರಲ್ಲಿಯ ಶಾಖಾಧಿಕಾರಿ [ಶಾಖಾಧಿಕಾರಿ(ಪ್ರಾರೂಪಣೆ), ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಮತ್ತು ಶಾಖಾಧಿಕಾರಿ(ಕಾನೂನು ಕೋಶ), ನಿವಾಸಿ ಆಯುಕ್ತರ ಕಚೇರಿ, ನವದೆಹಲಿ ಇಲ್ಲಿಯ ಹುದ್ದೆಗಳನ್ನು ಹೊರತುಪಡಿಸಿ] ಎಂಬ ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ (4)ನೇ ಅಂಕಣದಲ್ಲಿನ **'ಬಡ್ತಿಗಾಗಿ'** ಎಂಬ ಶೀರ್ಷಿಕೆಯಡಿಯಲ್ಲಿನ ನಮೂದುಗಳ ತರುವಾಯ ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ:–

> "ಪರಂತು, ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2013ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ **ಹಿರಿಯ ಸಹಾಯಕರ** ವೃಂದದಲ್ಲಿ ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳು ಬಡ್ತಿಗೆ ಲಭ್ಯವಿಲ್ಲದಿದ್ದಲ್ಲಿ, ಎರಡು ವರ್ಷಕ್ಕಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳನ್ನು ಬಡ್ತಿಗೆ ಪರಿಗಣಿಸಬಹುದು."

(ii) ಪತ್ರಾಂಕಿತ ಆಪ್ತ ಸಹಾಯಕರ ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳಲ್ಲಿ, (4)ನೇ ಅಂಕಣದಲ್ಲಿನ ನಮೂದುಗಳ ತರುವಾಯ ಈ ಮುಂದಿನ ಪರಂತುಕವನ್ನು ಕೊನೆಯಲ್ಲಿ ಸೇರಿಸತಕ್ಕದ್ದು, ಎಂದರೆ,–

"ಪರಂತು, ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) (ಎರಡನೇ ತಿದ್ದುಪಡಿ) ನಿಯಮಗಳು, 2013ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ **ಹಿರಿಯ ಶೀಘ್ರಲಿಪಿಗಾರರು** ವೃಂದದಲ್ಲಿ ಮೂರು ವರ್ಷಗಳಿಗಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳು ಬಡ್ತಿಗೆ ಲಭ್ಯವಿಲ್ಲದಿದ್ದಲ್ಲಿ, ಎರಡು ವರ್ಷಕ್ಕಿಂತ ಕಡಿಮೆ ಇಲ್ಲದಷ್ಟು ಅವಧಿಯ ಸೇವೆಯನ್ನು ಸಲ್ಲಿಸಿರುವ ವ್ಯಕ್ತಿಗಳನ್ನು ಬಡ್ತಿಗೆ ಪರಿಗಣಿಸಬಹುದು."

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**
ಸರ್ಕಾರದ ಉಪ ಕಾರ್ಯದರ್ಶಿ–2
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

## PERSONNEL AND ADMINISTRATIVE REFORMS SECRETARIAT

### NOTIFICATION

### NO. DPAR 102 SRD 2013, Bangalore, Dated: 30.12.2013

The draft of the following rules further to amend the Karnataka Government Secretariat Services (Recruitment) Rules, 1992, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore-560 001.

**DRAFT RULES**

**1. Title and Commencement.-** (1) These rules may be called the Karnataka Government Secretariat Services (Recruitment) (Second Amendment) Rules, 2013.

(2) They shall come into force from the date of their publication in the official Gazette.

**2. Amendment of Schedule.-** In schedule to the Karnataka Government Secretariat Services (Recruitment) Rules, 1992,-

(i) in the entries relating to the category of post of 'Section Officer (other than Section Officer (Drafting) Department of Parliamentary Affairs and Legislation and Section Officer (Legal Cell), Office of the Resident Commissioner, New Delhi at serial No.27', in column (4), under the heading 'For Promotion', the following proviso shall be inserted at the end namely:-

> "Provided that for a period of one year from the date of commencement of the Karnataka Government Secretariat Services (Recruitment) (Second Amendment) Rules, 2013, if persons who have put in a service of not less than three years in the cadre of Senior Assistant are not available, persons who have put in a service of not less than two years may be considered for promotion."

(ii) in the entries relating to the category of post of **'Gazetted Personal Assistant'**, in column (4), the following proviso shall be inserted at the end namely:-

> "Provided that for a period of one year from the date of commencement of the Karnataka Government Secretariat Services (Recruitment) (Second Amendment) Rules, 2013, if persons who have put in a service of not less than three years in the cadre of **Senior Stenographer** are not available, persons who have put in a service of not less than two years may be considered for promotion."

By Order and in the name of the Governor of Karnataka

**D. NAGESH PHATAK**
Deputy Secretary to Government-2,
Department of Personnel & Administrative
Reforms (Service Rules)

# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫) | ನಂ.೧೩೮೨ |
| **Part – IV-A** | **Bangalore, Monday, December 30, 2013 (Pushya 9, Shaka Varsha 1935)** | **No. 1382** |


## FINANCE SECRETARIAT

### NOTIFICATION

### No. FD17 PES 2013, Bangalore, dated 30.12.2013

The draft of the following rules further to amend the Karnataka Poisons (Prevention of misuse of methanol) Rules, 2013, which the Government of Karnataka proposes to make in exercise of the powers conferred by sections 2, 4 and sub-section (1) of section 8 of the Poisons Act, 1919 (Central Act 12 of 1919) is hereby published as required by sub-section (2) of section 8, for the information of all the the persons likely to be affected thereby and notice is hereby given that the said draft will be taken into consideration after thirty days from the date of its publication in the official Gazette.

Any objection or suggestion which may be received by the State Government from any person in respect of the said draft before the expiry of the period specified above will be considered by the State Government. The objections or suggestions may be addressed to the Principal Secretary to Government, Finance Department, Vidhana Soudha, Bangalore 560 001.

### DRAFT RULES

1. **Title, commencement and application :-** (1) These rules may be called the Karnataka Poisons (Prevention of misuse of Methanol) (amendment) Rules, 2013.
2. They shall come into force from the date of their publication in the official gazette.
3. **Amendment to Rule 3:**- In the rule 3 of the Karnataka Poisons (Prevention of misuse of Methanol) Rules, 2013, for the words "sixty days", the words "nine months" shall be substituted.

By order and in the name of the Governor of Karnataka

**SIDDESH POTHALAKATTI**
Under Secretary to Government
Finance Department (Excise)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫) | ನಂ. ೧೩೮೩ |
| **Part – IV-A** | **Bangalore, Monday, December 30, 2013 (Pushya 9, Shaka Varsha 1935)** | **No. 1383** |


## LAW, JUSTICE AND HUMAN RIGHTS SECRETARIAT

### NOTIFICATION

### No. LAW 15 HRC 2012, Bangalore, dated 28th December, 2013

In exercise of the powers conferred on me under sub-section (1) of Section 22 of the Protection of Human Rights Act, 1993 (Central Act No. 10 of 1994), I, H.R. Bhardwaj, Governor of Karnataka, hereby appoint Hon'ble Mr. Justice Darmar Murugesan, former Chief Justice of Delhi High Court and Member of National Human Rights Commission, New Delhi, as the Chairperson, Karnataka State Human Rights Commission, Bangalore, with immediate effect and until further orders.

**H.R. BHARDWAJ**
GOVERNOR OF KARNATAKA

By order and in the name of the Governor of Karnataka

**K.B. Changappa**
Principal Secretary to Government
Dept. of Law, Justice and Human Rights

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫)<br>Bangalore, Monday, December 30, 2013 (Pushya 9, Shaka Varsha 1935) | ನಂ. ೧೩೮೪<br>No. 1384 |
|---|---|---|

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 74 ಸೇಸಕಿ 2013, ಬೆಂಗಳೂರು ದಿನಾಂಕ: 30–12–2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 28–1–2013ರ ಪತ್ರದಲ್ಲಿ ಶ್ರೀ ಎ.ವೆಂಕಟಭಾಸ್ಕರ ರೆಡ್ಡಿ, ಸಹಾಯಕ ಇಂಜಿನಿಯರ್, ಇವರು ದಿನಾಂಕ 11–10–90 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು, 11–10–2000ಕ್ಕೆ 10 ವರ್ಷಗಳ ಸೇವೆ ಪೂರೈಸಿದ್ದು ನಂತರ ಅವರ ಸೇವೆಯನ್ನು ಸಂಖ್ಯೆ:ಪಿಡಬ್ಲ್ಯೂಡಿ: 19:ಪಿಡಬ್ಲ್ಯೂಸಿ:2003 ದಿನಾಂಕ 21–8–2003ರಲ್ಲಿ ದಿನಾಂಕ 11–10–2000 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಎ.ವೆಂಕಟಭಾಸ್ಕರರೆಡ್ಡಿ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3854–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Re Mr ks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3854-A | - | VENKATA BHASKARA REDDY A. | - | 26-02-1965 | 11-10-1990 | 11-10-2000 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾದಿತರಾಗಬಹುದಾದ ನೌಕರರು / ಅಧಿಕಾರಿಗಳು ಅವರ ಆಕ್ಷೇಪಣೆ / ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ

| ಭಾಗ – III<br>Part – III | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫)<br>Bangalore, Monday, December 30, 2013 (Pushya 9, Shaka Varsha 1935) | ನಂ. ೧೩೮೫<br>No. 1385 |
|---|---|---|

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 221 ಸೇಸಕಿ 2013, ಬೆಂಗಳೂರು ದಿನಾಂಕ: 30–12–2013**

ಲೋಕೋಪಯೋಗಿ ಇಲಾಖೆ ಮತ್ತು ಜಲ ಸಂಪನ್ಮೂಲ ಇಲಾಖೆಯ ಸಹಾಯಕ ಇಂಜಿನಿಯರ್‌ಗಳ ವೃಂದದ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ದಿನಾಂಕ 1–1–1980 ರಿಂದ 31–12–2004ರವರೆಗೆ ಇದ್ದಂತೆ ಪ್ರಕಟಿಸಲಾಗಿದ್ದು ಸದರಿ ಅಧಿಸೂಚನೆಯು ದಿನಾಂಕ: 22–11–2010ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ದಿನಾಂಕ 26–6–2013ರ ಪತ್ರದಲ್ಲಿ ಶ್ರೀ ಹೆಚ್.ಎಂ.ಮಹದೇವಪ್ಪ, ಸಹಾಯಕ ಇಂಜಿನಿಯರ್, ಇವರು ದಿನಾಂಕ 1–4–1991 ರಲ್ಲಿ ದಿನಗೂಲಿ ಮೇಲೆ ಸೇವೆಗೆ ಸೇರಿದ್ದು, 1–4–2001ಕ್ಕೆ 10 ವರ್ಷಗಳ ಸೇವೆ ಪೂರೈಸಿದ್ದು ನಂತರ ಅವರ ಸೇವೆಯನ್ನು ಸಂಖ್ಯೆ:ನೀಇ:424: ಪಿಡಬ್ಲ್ಯೂಸಿ:2001 ದಿನಾಂಕ 30–6–2001ರಲ್ಲಿ ದಿನಾಂಕ 1–4–2001 ರಿಂದ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಸಕ್ರಮಾತಿಗೊಳಿಸಿದ್ದು ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ 98 ಸೇಸಕಿ 08 ದಿನಾಂಕ 15–11–2010ರಲ್ಲಿ ಪ್ರಕಟಿಸಲಾಗಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸದರಿಯವರ ಹೆಸರು ಸೇರ್ಪಡೆಗೊಂಡಿರುವುದಿಲ್ಲವಾದ ಕಾರಣ ಈಗ ಸದರಿಯವರ ಹೆಸರನ್ನು ದಿನಾಂಕ 15–11–2010ರ ಅಧಿಸೂಚನೆಯಲ್ಲಿ ಪ್ರಕಟಿಸಿರುವ ಸಹಾಯಕ ಇಂಜಿನಿಯರ್ ವೃಂದದ ಜೇಷ್ಠತಾ ಪಟ್ಟಿಯಲ್ಲಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ)ರವರ ಶಿಫಾರಸ್ಸನ್ನು ಪರಿಶೀಲಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ ಲೋಇ:98:ಸೇಸಕಿ:08 ದಿನಾಂಕ 15–11–2010ರಲ್ಲಿ ಪ್ರಚುರಪಡಿಸಿರುವ ಸಹಾಯಕ ಇಂಜಿನಿಯರ್ ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಶ್ರೀ ಹೆಚ್.ಎಂ.ಮಹದೇವಪ್ಪ, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ 3863–A ರಲ್ಲಿ ಸೇರ್ಪಡೆ ಮಾಡಿ ಕೆಳಕಂಡಂತೆ ನಿಗದಿಪಡಿಸಲು ಉದ್ದೇಶಿಸಲಾಗಿದೆ.

| Ranking No | Provision AE. GRD No. | Name of the Engineer | SC/ ST | Date of Birth | Date of Entry into service | Date of Regular Appointment to the cadre | Re Mr ks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 3863-A | - | MAHADEVAPPA H.M. | - | 01-03-1966 | 01-04-1991 | 01-04-2001 | DWR |

ಸದರಿ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳೊಳಗಾಗಿ ಭಾಧಿತರಾಗಬಹುದಾದ ನೌಕರರು / ಅಧಿಕಾರಿಗಳು ಅವರ ಆಕ್ಷೇಪಣೆ / ಮನವಿಗಳಿದ್ದಲ್ಲಿ ಸಮರ್ಥನೀಯ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಕಾಸ ಸೌಧ, 3ನೇ ಮಹಡಿ, ಬೆಂಗಳೂರು 560001 ಇವರಿಗೆ ಸಲ್ಲಿಸಬಹುದಾಗಿದೆ. ನಿಗದಿತ ಅವಧಿಯ ನಂತರ ಸ್ವೀಕೃತವಾದ ಆಕ್ಷೇಪಣೆ/ಸಲಹೆ/ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಮೋಹನ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

# ವಿಶೇಷ ರಾಜ್ಯ ಪತ್ರಿಕೆ


| ಭಾಗ – IV-A | ಬೆಂಗಳೂರು, ಸೋಮವಾರ, ಡಿಸೆಂಬರ್ ೩೦, ೨೦೧೩ (ಪುಷ್ಯ ೯, ಶಕ ವರ್ಷ ೧೯೩೫) | ನಂ. ೧೩೮೬ |
|---|---|---|
| Part – IV-A | Bangalore, Monday, December 30, 2013 (Pushya 9, Shaka Varsha 1935) | No. 1386 |


## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 45 ಶಾಸನ 2013, ಬೆಂಗಳೂರು ದಿನಾಂಕ: 30–12–2013**

The Karnataka Land Revenue (Amendment) Bill, 2013 ಕ್ಕೆ 2013ರ ಡಿಸೆಂಬರ್ ಮಾಹೆಯ ಇಪ್ಪತ್ತ್ಮೂರನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2013ರ ಕರ್ನಾಟಕ ಅಧಿನಿಯಮ ಸಂಖ್ಯೆ:66 ಎಂಬುದಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**KARNATAKA ACT NO. 66 OF 2013**

(First published in the Karnataka Gazette Extra-ordinary on the Thirtieth day of December, 2013)

## THE KARNATAKA LAND REVENUE (AMENDMENT) ACT, 2013

(Received the assent of the Governor on the Twenty third day of December, 2013)

An Act further to amend the Karnataka Land Revenue Act, 1964.

Whereas, it is expedient further to amend the Karnataka Land Revenue Act, 1964 (Karnataka Act 12 of 1964) for the purposes hereinafter appearing;

Be it enacted by the Karnataka State Legislature in the sixty fourth year of the Republic of India, as follows:-

**1. Short title and commencement**.- (1) This Act may be called the Karnataka Land Revenue (Amendment) Act, 2013.

(2) It shall be deemed to have come into force with effect from 15th day of October, 2013.

**2. Amendment of Section 94-A.-** In Section 94-A of the Karnataka Land Revenue Act, 1964 (Karnataka Act 12 of 1964) in sub-section (1), for the words "each taluk", the words "each constituency of the Legislative Assembly" shall be substituted.

**3. Repeal and savings**.-(1) The Karnataka Land Revenue (Amendment) Ordinance, 2013 (Karnataka Ordinance No.1 of 2013) is hereby repealed.

(2) Notwithstanding such repeal anything done or any action taken under the principal Act as amended by the said Ordinance shall be deemed to have been done or taken under the principal Act as amended by this Act.

By Order and in the name of the Governor of Karnataka

**K.B. CHANGAPPA**
Secretary to Government(I/C)
Department of Parliamentary Affairs and Legislation

# ವಿಶೇಷ ರಾಜ್ಯ ಪತ್ರಿಕೆ

| ಭಾಗ – I | ಬೆಂಗಳೂರು, ಮಂಗಳವಾರ, ಡಿಸೆಂಬರ್ ೩೧, ೨೦೧೩ (ಪುಷ್ಯ ೧೦, ಶಕ ವರ್ಷ ೧೯೩೫) | ನಂ.೧೩೮೭ |
|---|---|---|
| **Part – I** | **Bangalore, Tuesday, December 31, 2013 (Pushya 10, Shaka Varsha 1935)** | **No. 1387** |

## ಕರ್ನಾಟಕ ಸರ್ಕಾರದ ನಡವಳಿಗಳು

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ ಬೆಂಗಳೂರು ಅಪರ (ಉತ್ತರ) ತಾಲ್ಲೂಕು, ಯಲಹಂಕ ಹೋಬಳಿ, ಬೆಳ್ಳಹಳ್ಳಿ ಗ್ರಾಮದ ಸರ್ವೆ ನಂ. 75, 76 ಮತ್ತು 77ರಲ್ಲಿ ಜಮೀನು ಮಂಜೂರು ಮಾಡಿರುವುದನ್ನು ಸ.ನಂ.55 ಎಂದು ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 642 ಎಲ್‌ಜಿಬಿ 2012 ದಿನಾಂಕ: 18.10.2012

(2) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 781 ಎಲ್‌ಜಿಬಿ 2012 ದಿನಾಂಕ: 22.08.2013

(3) ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(ಎನ್‌ಎ) ಸಿಆರ್.296/2012–13 ದಿನಾಂಕ: 04.09.2013

(4) ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(ಎನ್‌ಎ) ಸಿಆರ್.296/2012–13 ದಿನಾಂಕ: 11.11.2013

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ ಬೆಂಗಳೂರು ದಕ್ಷಿಣ ತಾಲ್ಲೂಕು, ತಾವರೆಕೆರೆ ಹೋಬಳಿ, ಕುರುಬರಹಳ್ಳಿ ಗ್ರಾಮದ ಸ.ನಂ. 89 ರಲ್ಲಿ 20.00 ಎಕರೆ ಜಮೀನನ್ನು ಮಂಜೂರು ಮಾಡಲಾಗಿತ್ತು.

ಸದರಿ ಜಮೀನು ಅರ್ಕಾವತಿ ಜಲಾನಯನ ಪ್ರದೇಶದ ವ್ಯಾಪ್ತಿಯಲ್ಲಿ ಬರುವುದರಿಂದ ವಸತಿ ಬಡಾವಣೆ ಮಾಡಲು ಸಾಧ್ಯವಿಲ್ಲದಿರುವುದರಿಂದ ಸದರಿ ಮಂಜೂರಾತಿಯನ್ನು ರದ್ದುಗೊಳಿಸಿ, ಮೇಲೆ ಓದಲಾದ ಕ್ರಮಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ ಬೆಂಗಳೂರು ಅಪರ (ಉತ್ತರ) ತಾಲ್ಲೂಕು, ಯಲಹಂಕ ಹೋಬಳಿ, ಬೆಳ್ಳಹಳ್ಳಿ ಗ್ರಾಮದ ಹೊಸ ಸರ್ವೆ ನಂಬರ್‌ಗಳಾದ 75, 76 ಮತ್ತು 77 ರಲ್ಲಿ 15–00 ಎಕರೆ ಜಮೀನನ್ನು ಮಂಜೂರು ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರು ಬೆಳ್ಳಹಳ್ಳಿ ಗ್ರಾಮದ ಸ.ನಂ. 75, 76 ಮತ್ತು 77 ರ ಜಮೀನುಗಳು ಸ.ನಂ.55 ರಲ್ಲಿ ಮಂಜೂರಾಗಿರುವ ಜಮೀನುಗಳಿಗೆ ಪೋಡಾಗಿರುವ ಸರ್ವೆನಂಬರ್‌ಗಳಾಗಿದ್ದು, ಅದಕ್ಕೆ ಬದಲಾಗಿ ಸ.ನಂ.55ರಲ್ಲಿ ಜಮೀನು ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶದಲ್ಲಿ ತಿದ್ದುಪಡಿ ಮಾಡಲು ಕೋರಿರುತ್ತಾರೆ. ಹಾಗೂ ಕ್ರಮಸಂಖ್ಯೆ(4)ರ ಪತ್ರದಲ್ಲಿ ಬೆಳ್ಳಹಳ್ಳಿ ಗ್ರಾಮದ ಸ.ನಂ.55ರ ಜಮೀನು ಸಿಡಿಪಿ ನಕ್ಷೆಯಂತೆ ಕೈಗಾರಿಕಾ ವಲಯದಲ್ಲಿರುವುದರಿಂದ ಸದರಿ ಜಮೀನನ್ನು ಕೈಗಾರಿಕಾ ವಲಯದಿಂದ ವಸತಿ ವಲಯಕ್ಕೆ ಭೂಬದಲಾವಣೆ ಮಾಡಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಪತ್ರ ಬರೆದಿರುವುದಾಗಿ ಸಹ ತಿಳಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 781 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 12–12–2013**

ಬೆಂಗಳೂರು ಅಪರ (ಉತ್ತರ) ತಾಲ್ಲೂಕು, ಯಲಹಂಕ ಹೋಬಳಿ, ಬೆಳ್ಳಹಳ್ಳಿ ಗ್ರಾಮದ ಹೊಸ ಸರ್ವೆ ನಂಬರ್‌ಗಳಾದ 75, 76 ಮತ್ತು 77 ರಲ್ಲಿ ಲಭ್ಯವಿರುವ ಗೋಮಾಳ ಜಮೀನಿನಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ 15–00 ಎಕರೆ ಜಮೀನನ್ನು ಹಂಚಿಕೆ ಮಾಡಲಾಗಿದ್ದ ಸರಕಾರಿ ಆದೇಶ ಸಂಖ್ಯೆ: ಆರ್‌ಡಿ 781 ಎಲ್‌ಜಿಬಿ 2012 ದಿನಾಂಕ: 22.08.2013 ನ್ನು ಭಾಗಶ: ಮಾರ್ಪಡಿಸಿ ಬೆಂಗಳೂರು ಅಪರ (ಉತ್ತರ) ತಾಲ್ಲೂಕು, ಯಲಹಂಕ ಹೋಬಳಿ, ಬೆಳ್ಳಹಳ್ಳಿ ಗ್ರಾಮದ ಸ.ನಂ. 75, 76 ಮತ್ತು 77 ರ ಬದಲಾಗಿ ಸ.ನಂ.55 ರಲ್ಲಿ 15–00 ಎಕರೆ ಜಮೀನನ್ನು ನಗರಾಭಿವೃದ್ಧಿ ಇಲಾಖೆಯು ಕೈಗಾರಿಕಾ ವಲಯದಿಂದ ವಸತಿ ವಲಯಕ್ಕೆ ಬದಲಾಯಿಸುವುದನ್ನು ಕಾಯ್ದಿರಿಸಿ ಕರ್ನಾಟಕ ಸರ್ಕಾರದ ಸಚಿವಾಲಯದ ನಾಲ್ಕನೇ ದರ್ಜೆ ನೌಕರರ ಸಂಘಕ್ಕೆ ಮಂಜೂರು ಮಾಡಿ ಆದೇಶಿಸಿದೆ. ಉಳಿದಂತೆ ಸದರಿ ಆದೇಶದಲ್ಲಿ ಇನ್ನಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಂಜೂರಾತಿ–I)


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| **ಭಾಗ – IV-A** | **ಬೆಂಗಳೂರು, ಮಂಗಳವಾರ, ಡಿಸೆಂಬರ್ ೩೧, ೨೦೧೩ (ಪುಷ್ಯ ೧೦, ಶಕ ವರ್ಷ ೧೯೩೫)** | **ನಂ.೧೩೮೮** |
| **Part – IV-A** | **Bangalore, Tuesday, December 31, 2013 (Pushya 10, Shaka Varsha 1935)** | **No. 1388** |


## URBAN DEVELOPMENT SECRETARIAT

### NOTIFICATION - I

### No. UDD 556 MyAPRa 2013, Bangalore, Dated: 31-12-2013

The draft of the Karnataka Town and Country Planning (Regulation of unauthorized Development or Constructions) Rules, 2013, which the Government of Karnataka proposes to make in exercise of the powers conferred by section 76FF and read with section 74 of the Karnataka Town and Country Planning Act, 1961 (Karnataka Act 11 of 1963) is hereby published as required under sub-section (1) of section 74 of the said Act for the information of all persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Urban Development Department, Vikasa Soudha, Bangalore-560 001.

### DRAFT RULES

**1. Title and commencement.-** (1) These rules may be called the Karnataka Town and Country Planning (Regularisation of unauthorised Developments) Rules 2013.

(2) They shall come into force from the date of their publication in the official Gazette.

(3) They shall apply to all unauthorised development that have come up on or after the date of approval of the first Master Plan of respective cities or towns, but before the date of 19th October, 2013.

**2. Definitions.-** In these rules, unless the context otherwise requires,-

(1) "Act" means the Karnataka Town and Country Planning Act, 1961 (Karnataka Act 11 of 1963);

(2) “Appellate Authority” means, the appellate authorities specified below to hear the appeals against orders passed by the Competent Authority, namely:-

(a)

(i) For Bruhath Bangalore Mahanagara Plalike;

(ii) For Bangalore Development Authority; and

(iii) For Bangalore-Mysore Infrastructure Corridor Area Planning Authority, the Metropolitan Commissioner, Bangalore Metropolitan Region Development Authority shall be the Appellate Authority.

(b) For other cities, having Corporations (Other than Bangalore), the respective Regional Commissioner; and

(c) For other Urban Development Authorities, Planning Authorities and Municipalities, the Deputy Commissioner of the concerned district. shall be the appellate authority

(3) "Architect / Engineer/Town Planner" means and includes a qualified Architect/Civil Engineer/Town Planner, who has been registered under concerned Urban Local Body.

